ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೆರಡನೆಯ ಅಧಿವೇಶನ

ಸೋಮವಾರ, ದಿನಾಂಕ: 14ನೇ ಡಿಸೆಂಬರ್, 2020

ಕೋವಿಡ್-19ರ ಸೋಂಕಿಗೀಡಾದ ಸಿಬ್ಬಂದಿಗೆ ಪರಿಹಾರಧನ ನೀಡುವ ಕುರಿತು

ಶ್ರೀ ಎಸ್.ಎಲ್. ಭೋಜೇಗೌಡ (ಶಿಕ್ಷಕರ ಕ್ಷೇತ್ರ):-

525(695) ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಸರ್ಕಾರದಿಂದ ರೂಪಿಸಲ್ಪಟ್ಟ ವಿದ್ಯಾಗಮ ಯೋಜನೆಯಿಂದ ಶಾಲೆಯ ಶಿಕ್ಷಕ/ಶಿಕ್ಷಕಿ/ಸಿಬ್ಬಂದಿಗಳು ಕೋವಿಡ್-19ಕ್ಕೆ ತುತ್ತಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಆ) ಬಂದಿದ್ದಲ್ಲಿ, ರಾಜ್ಯದಲ್ಲಿ ಎಷ್ಟು ಪ್ರಕರಣಗಳು ಸಂಭವಿಸಿದೆ; (ವಿವರ ನೀಡುವುದು)

(ಇ) ಈ ರೀತಿ ಸೇವೆಯ ಸಮಯದಲ್ಲಿ ಕೋವಿಡ್-19 ರಿಂದ ಸೋಂಕಿತರಾದ ಸಿಬ್ಬಂದಿಯ ಚಿಕಿತ್ಸೆಗೆ ಸರ್ಕಾರದಿಂದ ಯಾವ ಕ್ರಮ ತೆಗೆದುಕೊಳ್ಳಲಾಗಿದೆ ;

(ಈ) ಹಾಗಿದ್ದಲ್ಲಿ, ಇಲ್ಲಿಯವರೆವಿಗೂ ಎಷ್ಟು ಪ್ರಕರಣಗಳಿಗೆ ಸರ್ಕಾರದಿಂದ ಚಿಕಿತ್ಸೆಗಾಗಿ ಪರಿಹಾರಧನ ನೀಡಲಾಗಿದೆ; ಹಾಗೂ ಇನ್ನೂ ಎಷ್ಟು ಪ್ರಕರಣಗಳಲ್ಲಿ ಬಾಕಿ ಇದೆ ; (ಸೋಂಕಿತ ಸಿಬ್ಬಂದಿವಾರು ವಿವರ ನೀಡುವುದು)

(ಉ) ಪರಿಹಾರಧನ ನೀಡಲು ಬಾಕಿ ಇರುವುದಕ್ಕೆ ಕಾರಣವೇನು; ಯಾವ ಕಾಲಮಿತಿಯೊಳಗೆ ಪೂರ್ಣವಾಗಿ ಪಾವತಿಸಲಾಗುವುದು;

(ಊ) ಈಗಿರುವ ಶಿಕ್ಷಕರ ಕಲ್ಯಾಣ ನಿಧಿಯ ಲಾಭವನ್ನು ಸರ್ಕಾರಿ ಶಿಕ್ಷಕರು ಮಾತ್ರವೇ ಪಡೆದುಕೊಳ್ಳುತ್ತಿದ್ದು, ಖಾಸಗಿ ಶಿಕ್ಷಕರ ಕಲ್ಯಾಣ ನಿಧಿಯನ್ನು ಸ್ಥಾಪಿಸಲು ಸರ್ಕಾರ ಹಾಗೂ ಸಂಸ್ಥೆಗಳು ನಿರ್ಧರಿಸಿದೆಯೇ ; (ವಿವರ ನೀಡುವುದು)

(ಋ) ಸರ್ಕಾರದಿಂದ ಸರ್ಕಾರಿ ಶಿಕ್ಷಕರಿಗೆ ಏನಾದರೂ ವಿಶೇಷ ಸೌಲಭ್ಯಗಳನ್ನು ಘೋಷಿಸಿದಾಗ ಖಾಸಗಿ ಶಿಕ್ಷಕರಿಗೂ ಅದನ್ನು ಜಾರಿಗೊಳಿಸಲು ಸರ್ಕಾರ ಮುಂದಾಗಿದೆಯೇ ; (ವಿವರ ನೀಡುವುದು)

(ಎ) ಸೇವಾಭದ್ರತೆ, ಪಿ.ಎಫ್. ಸೌಲಭ್ಯಗಳನ್ನು ಎಲ್ಲಾ ಶಾಲಾ ಸಂಸ್ಥೆಯಲ್ಲಿ ಕಡ್ಡಾಯವಾಗಿ ಜಾರಿಗೊಳಿಸಲಾಗಿದೆಯೇ; ಈ ಬಗ್ಗೆ ಸರ್ಕಾರದ ನಿಲುವೇನು ?